

# ಕರ್ನಾಟಕ  ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3010 (2525)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ವಿಷಯ : ಮುಜರಾಯಿ ಇಲಾಖೆಯಿಂದ ನಿರ್ವಹಿಸುತ್ತಿರುವ ಛತ್ರಗಳ ನಿರ್ವಹಣೆ ಬಗ್ಗೆ

(ಅ) ಮುಜರಾಯಿ ಇಲಾಖೆಯಿಂದ ಧಾರ್ಮಿಕ ಸ್ಥಳಗಳಲ್ಲಿ ಭಕ್ತಾದಿಗಳಿಗಾಗಿ ಎಲ್ಲೆಲ್ಲಿ ಕರ್ನಾಟಕ ಛತ್ರಗಳನ್ನು ನಿರ್ಮಿಸಲಾಗಿದೆ; ಯಾವಾಗ ನಿರ್ಮಿಸಲಾಗಿದೆ ; (ವಿವರ ನೀಡುವುದು)

(ಆ) ನಿರ್ಮಿಸಲಾಗಿರುವ ಛತ್ರಗಳಲ್ಲಿ ಯಾವ ಯಾವ ಮೂಲಭೂತ ಸೌಲಭ್ಯಗಳನ್ನು ಭಕ್ತಾದಿಗಳಿಗೆ ಒದಗಿಸಲಾಗಿದೆ; ಕಳೆದ 3 ವರ್ಷಗಳಲ್ಲಿ ನಿರ್ವಹಣೆಗಾಗಿ ಎಷ್ಟು ಅನುದಾನವನ್ನು ವೆಚ್ಚ ಮಾಡಲಾಗಿದೆ; (ವಿವರವಾದ ಮಾಹಿತಿ ನೀಡುವುದು)

(ಇ) ಸದರಿ ಛತ್ರಗಳಲ್ಲಿ ಸೂಕ್ತವಾದ ನಿರ್ವಹಣೆ ಮಾಡದಿರುವುದರಿಂದ ಮೂಲಭೂತ ಸೌಕರ್ಯಗಳಿಲ್ಲದೆ ಭಕ್ತಾದಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಯಾವ ಕ್ರಮ ತೆಗೆದುಕೊಳ್ಳಲಾಗುವುದು ?